ಕರ್ನಾಟಕ ವಿಧಾನ ಪರಿಷತ್ತು
136 ನೇ ಅಧಿವೇಶನ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 615 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಹೆಚ್.ಎಂ. ರೇವಣ್ಣ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 14-12-2018 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರಗಳು |
|---|---|---|
| ಅ) | ಬೆಂಗಳೂರು-ಮಾಗಡಿ ರಾಜ್ಯ ಹೆದ್ದಾರಿ ಚತುಷ್ಪಥ ರಸ್ತೆ ಕಾಮಗಾರಿ ಮಂಜೂರಾಗಿದ್ದರೂ ಇಲ್ಲಿಯವರೆಗೆ ಕಾಮಗಾರಿ ಪ್ರಾರಂಭವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ.<br>ಬೆಂಗಳೂರು-ಮಾಗಡಿವರೆಗಿನ ರಾಜ್ಯ ಹೆದ್ದಾರಿ-85 ರಲ್ಲಿ ಸುಮಾರು 50 ಕಿಮೀ ಉದ್ದದ ರಸ್ತೆ ಕಾಮಗಾರಿಯನ್ನು ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ಕೆಶಿಪ್-3) ಯೋಜನೆಯಡಿ ಏಷಿಯನ್ ಡೆವಲಪ್‌ಮೆಂಟ್ ಬ್ಯಾಂಕ್ ಸಾಲದ ನೆರವಿನಲ್ಲಿ ಕಿಮೀ 15.325 ರಿಂದ 50.85 ರವರೆಗೆ (35 ಕಿಮೀ) ಚುತುಷ್ಪಥ ರಸ್ತೆ ವಿಸ್ತೀರ್ಣಕ್ಕೆ ಹಾಗೂ ಉಳಿದ 15 ಕಿಮೀ ರಸ್ತೆಯನ್ನು ದ್ವಿಪಥ ರಸ್ತೆ ವಿಸ್ತೀರ್ಣಕ್ಕೆ ಮೇಲ್ದರ್ಜೆಗೇರಿಸಲಾಗುವುದು.<br><br>ಗುತ್ತಿಗೆದಾರರ ನೇಮಕ ಪ್ರಕ್ರಿಯೆ ಅಂತಿಮ ಹಂತದಲ್ಲಿದ್ದು, ರಸ್ತೆ ಕಾಮಗಾರಿ ಪ್ರಾರಂಭಿಸಬೇಕಿದೆ. |
| ಆ) | ಈ ಕಾಮಗಾರಿಯು ಪೂರ್ಣಗೊಳ್ಳಲು ಎಷ್ಟು ಕಾಲಾವಕಾಶ ಬೇಕಾಗಿರುತ್ತದೆ; | ಈ ಕಾಮಗಾರಿಯನ್ನು ಪಿ.ಪಿ.ಪಿ. ಮಾದರಿಯಲ್ಲಿ ಹೈಬ್ರಿಡ್ ಆನ್ಯೂಟಿ ಗುತ್ತಿಗೆ ಮೂಲಕ ನಿರ್ವಹಿಸಲು ಯೋಜಿಸಲಾಗಿದ್ದು, ಕಾಮಗಾರಿಯನ್ನು 2 ವರ್ಷಗಳಲ್ಲಿ ಪೂರ್ಣಗೊಳಿಸಲಾಗುವುದು ಹಾಗೂ 7 ವರ್ಷಗಳ ಕಾಲ ಗುತ್ತಿಗೆದಾರರ ವತಿಯಿಂದ ರಸ್ತೆ ನಿರ್ವಹಣೆ ಮಾಡಲಾಗುವುದು. |
| ಇ) | ಈ ಯೋಜನೆಗೆ ತಗಲುವ ಅಂದಾಜು ಮೊತ್ತವೆಷ್ಟು; | ಬೆಂಗಳೂರು-ಮಾಗಡಿವರೆಗಿನ ಸುಮಾರು 50 ಕಿಮೀ ರಸ್ತೆ ಕಾಮಗಾರಿಯ ನಿರ್ಮಾಣದ ಅಂದಾಜು ವೆಚ್ಚ ರೂ. 288 ಕೋಟಿಗಳು. |
| ಈ) | ಈ ಕಾಮಗಾರಿಯು ವಿಳಂಬವಾಗುವುದಕ್ಕೆ ಕಾರಣವೇನು? | ರಸ್ತೆ ಕಾಮಗಾರಿಗೆ ಟೆಂಡರ್ ಪ್ರಕ್ರಿಯೆ ಅಂತಿಮ ಹಂತದಲ್ಲಿದ್ದು, ಭೂಸ್ವಾಧೀನ ಪ್ರಕ್ರಿಯೆಯಲ್ಲಿನ ಸಮಸ್ಯೆಗಳಿಂದ ಕಾಮಗಾರಿಯ ಪ್ರಾರಂಭದಲ್ಲಿ ವಿಳಂಬ ಉಂಟಾಗಿರುತ್ತದೆ.<br><br>ಒಟ್ಟಾರೆ ಯೋಜನೆಗೆ 1404 ಎಕರೆ ಭೂಸ್ವಾಧೀನದ ಅಗತ್ಯವಿದ್ದು, ಇದರಲ್ಲಿ ಶೇಕಡ 100 ರಷ್ಟು ಜಂಟಿ ಅಳತೆ ಹಾಗೂ 98 ರಷ್ಟು ದರ ನಿಗದಿ ಪ್ರಕ್ರಿಯೆ ಪೂರ್ಣಗೊಂಡಿದೆ. ಭೂಸ್ವಾಧೀನ ಪ್ರಕ್ರಿಯೆಯನ್ನು ನೇರ ಖರೀದಿ ವಿಧಾನದಲ್ಲಿ ಮಾಡಲಾಗುತ್ತಿದ್ದು, ಪ್ರಗತಿಯಲ್ಲಿದೆ. |

ಸಂಖ್ಯೆ. ಲೋಇ 228 ಇಎಪಿ 2018

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು